ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ಬಿ.ಎಂ.ಟಿ.ಸಿ ಪ್ರಯಾಣಿಕರಿಗೆ ಪ್ರೋತ್ಸಾಹ ನೀಡುವ ಕುರಿತು

ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

418(588) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಮೆಟ್ರೋ ರೈಲು ಪ್ರಾರಂಭವಾದ ಮೇಲೆ ಹೆಚ್ಚು ಜನ ಅದರಲ್ಲೇ ಪ್ರಯಾಣ ಮಾಡುತ್ತಿದ್ದು, ಇದರಿಂದ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಪ್ರಯಾಣಿಕರ ಸಂಖ್ಯೆ ಕಡಿಮೆಯಾಗಿಲ್ಲವೇ; ಇದರಿಂದ ಸಂಸ್ಥೆಗೆ ಆದ ನಷ್ಟ ಎಷ್ಟು; (ನಷ್ಟದ ಬಗೆಗಿನ ಮಾಹಿತಿ ಒದಗಿಸುವುದು)

(ಆ) ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಪ್ರಯಾಣ ಮಾಡುವಂತೆ ಪ್ರೋತ್ಸಾಹಿಸಲು ಸಂಸ್ಥೆ ಏನಾದರೂ ಆಕರ್ಷಕವಾದ ಕಾರ್ಯಕ್ರಮ ಹಮ್ಮಿಕೊಂಡಿದೆಯೇ; (ವಿವರ ಒದಗಿಸುವುದು)

(ಇ) ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಹಿರಿಯ ನಾಗರಿಕರಿಗೆ, ಮಕ್ಕಳಿಗೆ, ಮಹಿಳೆಯರಿಗೆ ರಿಯಾಯಿತಿ ಪಾಸುಗಳನ್ನು ನೀಡುವುದು, ಹಿಂದೆ ಮಾಡುತ್ತಿದ್ದಂತೆ ಬಸ್ ಟಿಕೆಟ್ ನಂಬರುಗಳಿಗೆ ಲಾಟರಿ ಎತ್ತಿ ಬಹುಮಾನಗಳನ್ನು ನೀಡುವಂತಹ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಮೂಲಕ ಸಾರ್ವಜನಿಕರನ್ನು ಆಕರ್ಷಿಸಲಾಗುವುದೇ; ಈ ಬಗ್ಗೆ ಸಂಸ್ಥೆಯ ನಿಲುವೇನು?